ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಅರಣ್ಯ ಸಸಿಗಳನ್ನು ಕೃಷಿ ಭೂಮಿಯಲ್ಲಿ ಬೆಳೆಸುವ ಪ್ರೋತ್ಸಾಹದಾಯಕ ಯೋಜನೆ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

08 (99) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕಳೆದ ಮೂರು ವರ್ಷಗಳಲ್ಲಿ ಮಂಡ್ಯ ಜಿಲ್ಲೆಯ ವ್ಯಾಪ್ತಿಯಲ್ಲಿ ಅರಣ್ಯ ಸಸಿಗಳನ್ನು ಕೃಷಿ ಭೂಮಿಯಲ್ಲಿ ಬೆಳೆಸುವ ಪ್ರೋತ್ಸಾಹದಾಯಕ ಯೋಜನೆಯಡಿಯಲ್ಲಿ ಎಷ್ಟು ಅರಣ್ಯ ಸಸಿಗಳನ್ನು ನೆಡಲಾಗಿದೆ; ಈ ಸಂಬಂಧ 2018-19 ರಿಂದ 2020-21 ನೇ ಸಾಲಿನಲ್ಲಿ ಫಲಾನುಭವಿ ರೈತರುಗಳಿಗೆ ವಿತರಣೆ ಮಾಡಿರುವ ಸಾಮಾಗ್ರಿಗಳ ವೆಚ್ಚದ ಮತ್ತು ಇತರೆ ವೆಚ್ಚಗಳ ವಿವರಗಳೆಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಆ) ನಾಗಮಂಗಲ ತಾಲ್ಲೂಕಿನ ವ್ಯಾಪ್ತಿಯಲ್ಲಿನ ಸಾಮಾಜಿಕ ಅರಣ್ಯ ವಲಯ ಅರಣ್ಯಾಧಿಕಾರಿಗಳು ತಾಲ್ಲೂಕಿನ ರೈತ ಫಲಾನುಭವಿಗಳಿಗೆ ಕಳೆದ ಮೂರು ವರ್ಷಗಳಿಂದ ಸಾಮಗ್ರಿ ವೆಚ್ಚವನ್ನು ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇವರ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು;

(ಇ) ಈ ಯೋಜನೆಯಡಿ ಸರ್ಕಾರ ನಿಗಧಿ ಮಾಡಿರುವ ಸಾಮಗ್ರಿ ವೆಚ್ಚ, ಸಾಗಾಣೆ ವೆಚ್ಚ, ನಿರ್ವಹಣೆ ವೆಚ್ಚಗಳಿಗೆ ಸಂಬಂಧಿಸಿದಂತೆ ರೈತರಿಗೆ ನೀಡಲಾಗುವ ಮೊತ್ತವೆಷ್ಟು; ಈ ಬಗ್ಗೆ ಇರುವ ಸರ್ಕಾರದ ಸುತ್ತೋಲೆಯೊಂದಿಗೆ ಸಂಪೂರ್ಣ ವಿವರ ನೀಡುವುದು;

(ಈ) ಕಳೆದ ಮೂರು ವರ್ಷಗಳಲ್ಲಿ ಸರ್ಕಾರ ಎಷ್ಟು ಮೊತ್ತವನ್ನು ಈ ಯೋಜನೆಗೆ ವೆಚ್ಚ ಮಾಡಿದೆ? (ತಾಲ್ಲೂಕುವಾರು ವಿವರ ನೀಡುವುದು)